ಭೂಮಿ ಅತಿ ಮುಖ್ಯವಾದದ್ದು ಎನ್ನುವಂತೆ ಬೋಧಿಸುವುದು!

# ನೆಲಗೊಬ್ಬರವನ್ನು ಹುಡುಕುತ್ತಾ – 1

ಮಣ್ಣಿನ ಮಾದರಿಯನ್ನು ಸಂಗ್ರಹಿಸಲು ಒಂದು ಸ್ಥಳವನ್ನು ಆಯ್ಕೆ ಮಾಡಿ. ಆ ಸ್ಥಳವು ಆಟದ ಮೈದಾನ, ಶಾಲೆಯ ಕೈತೋಟ, ಒಂದು ಮರದಡಿಯ ಜಾಗ, ಶಾಲೆಯ ಗೇಟಿನ ಹೊರಭಾಗ – ಹೀಗೆ ಯಾವುದೂ ಆಗಬಹುದು. ಕೆಲವು ನಿಮಿಷಗಳು ಆ ಮಣ್ಣಿನ ಮಾದರಿಯನ್ನು ಗಮನಿಸಿ.

1. ನಿಮ್ಮ ಕೈಗಳು ಅಥವಾ ಸಣ್ಣ ಸನಿಕೆಯನ್ನು ಉಪಯೋಗಿಸಿ, ಶಾಲೆಯ ಒಳಗಿನ – ಹೊರಗಿನ ಕೆಲವು ಆಯ್ದ ಸ್ಥಳಗಳಿಂದ ಮಣ್ಣಿನ ಮಾದರಿಯನ್ನು ಸಂಗ್ರಹಿಸಿ; ಪ್ರತಿ ಮಾದರಿಯನ್ನೂ ಸ್ವಚ್ಛ ಪಾತ್ರೆಯೊಳಗೆ ಅಥವಾ ಝಿಪ್‌ಲಾಕ್ ಚೀಲದೊಳಗಿಟ್ಟು ಮುಚ್ಚಿಡಿ.
2. ಮಣ್ಣಿನ ಮಾದರಿಯ ಗುಣಮಟ್ಟದ ಮೇಲೆ ಪ್ರಭಾವ ಬೀರುವ ನಿರ್ಜೀವ ಹಾಗೂ ಜೀವಿ ಘಟಕಗಳಗಳ ಬಗ್ಗೆ ನಿಮ್ಮ ಅನಿಸಿಕೆಯನ್ನು, 'ಸಂಕ್ಷಿಪ್ತ ವಿವರಣೆ' ಎಂಬ ಕಡೆ ದಾಖಲಿಸಿ.

– ಮಾದರಿ ಸಂಗ್ರಹಣೆ ಮಾಡಿದ ಸ್ಥಳವು ಒದ್ದೆಯಿತ್ತೇ ಅಥವಾ ಒಣಗಿತ್ತೇ? ಮಣ್ಣಿನ ಮಾದರಿಯು ಮುಟ್ಟಿದಾಗ ತೇವಾಂಶವಿದೆಯೇ ಅಥವಾ ಮರಳುಮರಳಾಗಿದೆಯೇ? ಒದ್ದೆ ಮಣ್ಣಿನ' ಪರಿಮಳ ನಿಮಗೆ ಬಂತೇ, ಇಲ್ಲವೇ?

– ಮಾದರಿ ಸಂಗ್ರಹಿಸಿದ ಸ್ಥಳವು ಬರಡಾಗಿತ್ತೇ? ಇಲ್ಲದಿದ್ದಲ್ಲಿ ಅಲ್ಲಿದ್ದ ಸಸ್ಯಗಳು (ಹುಲ್ಲು, ಸಣ್ಣ ಗಿಡಗಳು ಇತ್ಯಾದಿ) ಯಾವುವು? ಅಲ್ಲಿ ಕೇವಲ ಮರಗಳಿವೆಯೇ ಅಥವಾ ಸಣ್ಣ ಸಣ್ಣ ಇತರ ಗಿಡಗಳೂ ಇವೆಯೇ? ಅಲ್ಲಿನ ಸಸ್ಯ ಸಂಪತ್ತು ಒತ್ತಾಗಿದೆಯೇ ಅಥವಾ ನಡುನಡುವೆ ಖಾಲಿ, ಬರಡು ಮಣ್ಣಿನ ಸ್ಥಳಗಳಿವೆಯೇ? ನೆಲದ ಮೇಲೆ ಉದುರಿದ ಎಲೆಗಳ ರಾಶಿಯಿದೆಯೇ? ಎಲೆರಾಶಿಯ ಕೆಳಗಿನ ಮಣ್ಣನ್ನು ನೀವು ಸಂಗ್ರಹಿಸಿದಿರೇ? ಇತ್ಯಾದಿ.

– ಆ ಸ್ಥಳದಲ್ಲಿ ಯಾವುದಾದರೂ ಪ್ರಾಣಿ – ಪಕ್ಷಿಗಳಿವೆಯೇ? ಅಲ್ಲಿ ನೀವೇನಾದರೂ ಎರೆಹುಳು, ಇರುವೆ ಅಥವಾ ಬಸವನ ಹುಳುವನ್ನು ಕಂಡಿರಾ?

**ನಿಮಗೆ ಬೇಕಾಗುವ ಸಾಮಗ್ರಿ:**


**ಸಣ್ಣ ಕೈಸನಿಕೆ**


**ಝಿಪ್‌ಲಾಕ್ ಚೀಲ**


**ಪೆನ್ಸಿಲ್**

| **ಕೋಷ್ಟಕ 1** |
|---|
| **ಮಾದರಿ ಸಂಗ್ರಹಣಾ ಸ್ಥಳದ ಸಂಕೇತ:** |
| **ದಿನಾಂಕ:** |
| **ಸಮಯ:** |
| **ಸಂಕ್ಷಿಪ್ತ ವಿವರಣೆ:** |

Design: Vidya Kamalesh

**ಕೊಡುಗೆ**
**ರಾಧಾ ಗೋಪಾಲನ್** ಅವರು ಒಬ್ಬ ಪರಿಸರ ವಿಜ್ಞಾನಿಯಾಗಿದ್ದು, ಮುಂಬೈನ ಐ.ಐ.ಟಿ.ಯಿಂದ ಪಿ.ಎಚ್.ಡಿ. ಪದವಿ ಪಡೆದಿದ್ದಾರೆ. ಪರಿಸರವಿಜ್ಞಾನದ ಸಲಹಾಕಾರರಾಗಿ 18 ವರ್ಷಗಳು ಕಾರ್ಯನಿರ್ವಹಿಸಿದ ನಂತರ, ರಿಷಿ ವ್ಯಾಲಿ ಶಾಲೆಯಲ್ಲಿ ಪರಿಸರವಿಜ್ಞಾನವನ್ನು ಬೋಧಿಸಿದರು; ಅಜೀಂ ಪ್ರೇಮ್‌ಜೀ ವಿಶ್ವವಿದ್ಯಾಲಯದ 'ಸ್ಕೂಲ್ ಆಫ್ ಡೆವಲಪ್‌ಮೆಂಟ್'ನ ಸಂದರ್ಶಕ ಉಪನ್ಯಾಸಕಿಯಾಗಿದ್ದಾರೆ ಹಾಗೂ ಭಾರತದ 'ಫುಡ್ ಸಾವೆರನಿಟಿ ಅಲಯನ್ಸ್' ಸಂಸ್ಥೆಯ ಸದಸ್ಯರಾಗಿದ್ದಾರೆ. **ಅನುವಾದ**: ಎಚ್. ಪಿ. ಘನಶ್ಯಾಮ
**ಪರಿಶೀಲನೆ**: ಮನೋಜ ಗೋಡಬೋಲೆ

ಐ ವಂಡರ್...
ಶಾಲಾ ವಿಜ್ಞಾನದ ಮರುಶೋಧನೆ

Azim Premji University